# ಮುನ್ನುಡಿ

ಆರ್ಯಧರ್ಮದ ರೀತಿ ಹೆಂಡತಿಯು ದೇವದೂತನಾದ ಅಗ್ನಿಯ ಮೂಲಕ ಮನುಷ್ಯನಿಗೆ ದೊರೆದು ಆತ್ಮಪೂರ್ಣತೆಯುಂಟಾಗುವುದು.

**ಸೋಮಃ ಪ್ರಥಮೊ ವಿವಿದೆ**
**ಗಂಧರ್ವೋ ವಿವಿದ ಉತ್ತರಃ।**
**ತೃತೀಯೊ ಅಗ್ನಿಷ್ಟೆ ಪತಿಃ**
**ತುರೀಯಸ್ತೆ ಮನುಷ್ಯಜಾಃ ॥**

ಋ. ಮಂ. ೧೦ । ಸೂ. ೮೫ । ಮಂ. ೪೦.

ಎಲೈ ಹುಡುಗಿಯೆ, ಸೋಮನು ಮೊದಲು ನಿನ್ನನ್ನು ಮದುವೆಯಾದನು, ಗಂಧರ್ವನು ಅನಂತರ ಮದುವೆಯಾದನು, ನಿನಗೆ ಮೂರನೆಯ ಗಂಡನು ಅಗ್ನಿಯು, ನಾಲ್ಕನೆಯವನು ನಿನಗೆ ಮನುಷ್ಯೋದ್ಭವನು.

**ಸೋಮಂ ಶೌಚಂ ದಾದಾವಾಸಾಂ**
**ಗಂಧರ್ವಶ್ಚ ಶುಭಾಂಗಿರಮ್॥**

ಯಾಜ್ಞವಲ್ಕ್ಯ, ೧-೭೧.

ಸೋಮನು ಇವರಿಗೆ (ಹೆಣ್ಣುಮಕ್ಕಳಿಗೆ) ಶುಚಿತ್ವವನ್ನು ಕೊಟ್ಟನು. ಅಂದರೆ ತನ್ನಂತೆಯೆ ೨೯ ದಿನಗಳಿಗೆ ಒಂದಾವರ್ತಿ ಪೂರ್ಣ ಕಲೆಯಿಂದ ಕೂಡಿ ಸಂಸ್ಕಾರ ಶುಚಿಯನ್ನು ಪಡೆಯುವದನ್ನು ತಿಳುಹಿಸಿದನು. ಗಂಧರ್ವನು ಇವರ ಕಂಠದಲ್ಲಿ ಬೆರದು ಶೋಭನ ಧ್ವನಿಯನ್ನು ಕೊಡುವನು. ಆಮೇಲೆ ಅಗ್ನಿಯು ಇವರ ಅಂಗಗಳಲ್ಲಿ ಬೆರದು ತೇಜಸ್ಸನ್ನು ಸೇರಿಸುವನು. ಇದಕ್ಕೆ ಕಾಲಪರಿಮಾಣವನ್ನು ಗೊತ್ತುಮಾಡಿ.

**ತ್ರೀಣಿವರುಷಾಣ್ಯುದೀಕ್ಷೇತ**
**ಕುಮಾರ್ಯೃತುಮತೀಸತಿ**
**ಊರ್ಧ್ವಂತುಕಾಲಾದೇತಸ್ಮಾತ್**
**ವಿಂದೇತ ಸದೃಶಂ ಪತಿಮ್॥**

ಮನು, ೯|೯೦.

ಕುಮಾರಿಯು ಋತುಮತಿಯಾದಂದಿನಿಂದ ಮೂರು ವರುಷಗಳ ವರಿಗೆ ತಡೆದು ಆಮೇಲೆ ತನಗೆ ಸರಿಹೋಲುವ ಗಂಡನನ್ನು ಪಡೆಯುವುದು. ಸೋಮ, ಗಂಧರ್ವ, ಅಗ್ನಿ ಇವರುಗಳು ಹೆಣ್ಣುಮಕ್ಕಳ ಅಂಗಗಳಲ್ಲಿ ಬೆರದು ತಮ್ಮ ದೇವತೇಜಸ್ಸುಗಳನ್ನು ಸ್ಥಾಯಿಯಾಗಿ ಮಾಡುವವರಿಗೂ ಹೆಂಗಸರು ಮನುಷ್ಯಪುತ್ರನಿಂದ ಸ್ವೀಕರಿಸಲು ಯೋಗ್ಯರಲ್ಲವು ಎಂದು ಮೇಲೆ ಹೇಳಿದ ಜರದಷ್ಟಿ ಋಕ್ಕಿನಿಂದ ತಿಳಿದು ಬರುವುದು. ಇತಿ,

**ಆರ್. ವ್ಯಾ.**

# ವಿವಾಹ ಮಂಗಳ



೧

**ಸ ಇಮಮೇವಾತ್ಮಾನಂ ದ್ವೇಧಾಪಾತಯತ್ ತತಃ ಪತಿಶ್ಚ
ಪತ್ನೀಚಾ ಭವತಾಮ್।**

ಬೃಹದಾರಣ್ಯಕೋಪನಿಷತ್ ೧।೪।೩.

ಆ ಪ್ರಜಾಪತಿಯು ಈ ಶರೀರವನ್ನು ಎರಡು ಭಾಗವಾಗಿ ಮಾಡಿದನು ಮತ್ತು ಅವುಗಳಿಂದಲೇ ಪತಿ ಪತ್ನಿಯರಾದರು.

೨

**ಅರ್ಧೋ ಹ ವಾ ಏಷ ಆತ್ಮನೊ ಯಜ್ಜಾಯೇತಿ।**

ವಾಜಸನೇಯ ಶ್ರುತಿ.

ಹೆಂಡರು ತನ್ನ ಅರ್ಧ ಭಾಗವು.

**ಯಾವನ್ನವಿಂದತೆ ಜಾಯಾಂ ತಾವದರ್ಧೋಭವೇತ್
ಪುಮಾನ್ ।**

ವ್ಯಾಸ ಸಂಹಿತಾ, ೧।೧೪.

ಗಂಡಸು ಹೆಂಡರನ್ನು ಪಡೆಯುದವರಿವಿಗೂ ಒಂದರ್ಧವೇ ಆಗಿರುತ್ತಾನೆ.

# ಆಶೀರ್ವಾದ

೧

**ಮಾ ವಿದನ್ ಪರಿಪಂಥಿನೊ ಯ ಆಸೀಂದತಿ ದಂಪತೀ।**
**ಸುಗೇಭಿರ್ದುರ್ಗಮತೀತಾಮಪದ್ರಾತ್ವರಾತಯಃ ॥**

ಋಗ್ವೇದ ಸಂಹಿತಾ, ೧೦।೮೫।೩.

ದಂಪತಿಗಳಿರುವೆಡೆಯಲ್ಲಿ ಎದರುಬದರು ವ್ಯಾಜ್ಯವಾಡುವರು ತಮ್ಮ ಶತ್ರುತೆಯನ್ನು ಮರೆತುಬಿಡಲಿ! ಇವರು ಅನುಕೂಲದ ದಾರಿಯಿಂದ ದುಃಖಗಳನ್ನು ಪಾರಾಗಲಿ ಮತ್ತು ಇವರ ಶತ್ರುಗಳು ಇವರ ದಾರಿಯಿಂದ ಬೀಳ್ಕೊಳ್ಳಲಿ.

೨

**ಇಹೈವ ಸ್ತಂ ಮಾ ವಿಯೌಷ್ಟಂ ವಿಶ್ವಮಾಯುರ್ವ್ಯಶ್ನುತಮ್।**
**ಕ್ರೀಡನ್ತೌ ಪುತ್ರೈರ್ನಪ್ತೃಭಿರ್ಮೋದಮಾನೌ ಸ್ವೇಗೃಹೆ ॥**

ಋಗ್ವೇದ ಸಂಹಿತಾ, ೧೦।೮೫।೪೨.

ನೀವಿಬ್ಬರೂ ಇಲ್ಲಿಯೆ ಇರುವುದು, ಬೇರ್ಪಡಬೇಡ. ಸಂಪೂರ್ಣ ಆಯುರ್ಮಾನವನ್ನು ಪಡೆಯಿರಿ, ಮಕ್ಕಳು ಮರಿಮಕ್ಕಳೊಡನೆ ಆಟವಾಡುತ್ತಾ, ಸಂತೋಷಪಡುತ್ತಾ ಸ್ವಂತ ಮನೆಯಲ್ಲಿ ಇರಿ.

೩

**ಇಹೇಮಾವಿಂದ್ರ ಸಂನೂದ ಚಕ್ರವಾಕೇವ ದಂಪತೀ।**
**ಪ್ರಜಯೈನೌ ಸ್ವಸ್ತಕೌ ವಿಶ್ವಮಾಯುರ್ವ್ಯಶ್ನುತಾಮ್ ॥**

ಅಥರ್ವವೇದ ಸಂಹಿತಾ, ೧೪।೨।೬೪.

ಎಲೈ ಇಂದ್ರನೆ, ಚಕ್ಕವಕ್ಕಿಗಳಂತೆ ಈ ದಂಪತಿಯನ್ನು ಜೋಡಿಸುವವನಾಗು, ಇವರಿಬ್ಬರೂ ಸಂತಾನ ಲಾಭವನ್ನು ಪಡೆಯಲಿ, ಇವರ ಮನೆಯು ಉತ್ತಮವಾದದ್ದು ಆಗಲಿ ಮತ್ತು ಇವರಿಗೆ ಸಂಪೂರ್ಣ ಆಯುಸ್ಸು ದೊರೆಯಲಿ.

೪

(ಹೆಣ್ಣಿಗೆ ಆಶೀರ್ವಾದ)

**ಸ್ಯೋನಾಭವ ಶ್ವಶುರೇಭ್ಯಃ**
**ಸ್ಯೋನಾಪತ್ಯೋ ಗೃಹೇಭ್ಯಃ ।**
**ಸ್ಯೋನಾಸ್ಯೈ ಸರ್ವಸ್ಯೈ ವಿಶೆ**
**ಸ್ಯೋನಾ ಪುಷ್ಟಾಯೈಷಾಂ ಭವ ॥**

ಅಥರ್ವವೇದ ಸಂಹಿತಾ, ೧೪ । ೨ । ೨೭.

ನೀನು ಅತ್ತೆಮಾವಂದಿರಿಗೆ ಸುಖವನ್ನುಂಟುಮಾಡುವಳಾಗು, ನೀನು ನಿನ್ನ ಗಂಡನ ಮನೆಗೆ ಸೌಖ್ಯವನ್ನುಂಟುಮಾಡುವಳಾಗು, ಈ ಸಮಸ್ತ ಜನಗಳಿಗೂ ಸುಖವನ್ನು ಉಂಟುಮಾಡುವಳಾಗು, ನೀನು ಇವರ ಪುಷ್ಟಿಗಾಗಿ ಸುಖವನ್ನು ತರುವಳಾಗು.

## ಮಂತ್ರ

೧

(ವರಕನ್ಯೆಯರನ್ನು ಎದುರಲ್ಲಿ ತರುವಾಗ)

**ಸಮಂಜಂತು ವಿಶ್ವೇದೇವಾಃ**
**ಸಮಾಪೋ ಹೃದಯಾನಿನೌ ।**
**ಸಂ ಮಾತರಿಶ್ವಾ ಸಂಧಾತಾ**
**ಸಮುದ್ರೇಷ್ಟ್ರೀ ದಧಾತುನೌ ॥**

ಋಗ್ವೇದ ಸಂಹಿತಾ, ೧೦ । ೮೫ । ೪೭.

ಸಕಲ ದೇವತೆಗಳು ನಮ್ಮಿಬ್ಬರನ್ನು ಜೋಡಿಸಲಿ, ನೀರು ನಮ್ಮಿಬ್ಬರನ್ನು ಒಂದು ಮಾಡಲಿ, ವಾಯುವು ನಮ್ಮಿಬ್ಬರನ್ನೂ ಜೋಡಿಸಲಿ, ಸದುಪದೇಶಕಾರಿಣಿಯಾದ ಸರಸ್ವತಿಯು ನಮ್ಮಿಬ್ಬರಿಗೂ ಏಕಭಾವವನ್ನು ಈಯಲಿ.

## ೨

(ವರಕನ್ಯೆಯರ ಶುಭದೃಷ್ಟಿಯ ಕಾಲದಲ್ಲಿ)

**ಆ ನಃ ಪ್ರಜಾಂ ಜನಯತು ಪ್ರಜಾಪತಿಃ**
**ರಾಜರಸಾಯ ಸಮನಕ್ತ್ವರ್ಯಮಾ ।**
**ಅದುರ್ಮಂಗಲೀಃ ಪತಿಲೋಕಮಾವಿಶ**
**ಶನ್ನೋ ಭವದ್ವಿಪದೇ ಶಂ ಚತುಷ್ಪದೆ ॥**

**ಅಘೋರ ಚಕ್ಷುರಪತಿಘ್ನೀದಿ**
**ಶಿವಾಪಶುಭ್ಯಃ ಸುಯಮಾಃ ಸುವರ್ಚಾಃ ।**
**ವೀರಸೂರ್ದೇವಕಾಮಾ ಸ್ಯೋನಾ**
**ಶನ್ನೋ ಭವ ದ್ವಿಪದೆ ಶಂ ಚತುಷ್ಪದೆ ॥**

**ಇಮಾಂ ತ್ವಂ ಇಂದ್ರಮೀಢ್ವಃ**
**ಸುಪುತ್ರಾಂ ಸುಭಗಾಂ ಕೃಣು ।**
**ದಶಾಸ್ಯಾಂ ಪುತ್ರಾನಾದೇಹಿ**
**ಪತಿಮೇಕಾದಶಂ ಕೃಧಿ ॥**

ಋಗ್ವೇದ ಸಂಹಿತಾ, ೧೦ । ೮೫ । ೪೪.

ಪ್ರಜಾಪತಿಯು ಇವಳ ಮುಖಾಂತರ ಮಕ್ಕಳನ್ನು ಸೃಷ್ಟಿಸಲಿ, ಐಶ್ವರ್ಯ ಮತ್ತು ರತ್ನಗಳನ್ನು ಆರ್ಯಮನು ಇವಳಲ್ಲಿ ಉಂಟು ಮಾಡಲಿ.

ನೀನು ಸೌಮ್ಯ ನೋಟವುಳ್ಳವಳಾಗು, ಅಪತಿಘಾತಿನಿಯಾಗು, ನೀನು ದನಕರುಗಳಿಗೆ ಮಂಗಳವನ್ನುಂಟುಮಾಡು, ನಿಯಮಿತಚಿತ್ತ ಳಾಗು ಮತ್ತು ತೇಜಸ್ವಿನಿಯಾಗು! ನೀನು ವೀರಪುತ್ರರನ್ನು ಹೆರು, ಉತ್ತಮವಾದ ಆಶೆಗಳನ್ನು ಪಡೆ, ನಮ್ಮಿಬ್ಬರಿಗೂ ಕಲ್ಯಾಣವನ್ನುಂಟು ಮಾಡು, ನಮ್ಮ ದ್ವಿಪದ ಚತುಷ್ಪದಗಳಿಗೆ ಮಂಗಳವನ್ನು ತರು.

ಎಲೈ ಇಂದ್ರನೆ, ಇವಳನ್ನು ಸುಪುತ್ರವಂತಳನ್ನಾಗಿಯೂ ಮಂಗಳಾಂಗಿಯನ್ನಾಗಿಯೂ ಮಾಡು, ಹತ್ತು ಮಕ್ಕಳನ್ನು ಕೊಡು, ಗಂಡನನ್ನು ಹನ್ನೊಂದನೆಯವನನ್ನಾಗಿ ಮಾಡು.

(ಕನ್ಯಾದಾನ ಮಾಡಿದ ಮೇಲೆ ತಂದೆಯು ವರನನ್ನು ಪ್ರಾರ್ಥಿಸುತ್ತಾನೆ)

**ಧರ್ಮೇಚಾರ್ಥೇಚ ಕಾಮೇಚ**
**ನಾತಿಚರಿತವ್ಯಾ ತ್ವಯೇಯಮ್ ।**

ನೀನು ಧರ್ಮ, ಅರ್ಥ ಮತ್ತು ಕಾಮದಲ್ಲಿ ಇವಳನ್ನು ಮೀರಿ ನಡೆಯಬೇಡ.

(ವರನ ಸ್ವೀಕಾರ)

**ನಾತಿ ಚರಿಷ್ಯಾಮಿ**

ನಾನು ಮೀರುವುದಿಲ್ಲ.

೪

(ಪಾಣಿಗ್ರಹಣ ಹೋಮದಲ್ಲಿ ವರನು ಕನ್ಯೆಯ ಕೈಯನ್ನು ಹಿಡಿಯುವಾಗ)

**ಗೃಹ್ಣಾಮಿತೆ ಸೌಭಗತ್ವಾಯ ಹಸ್ತಂ**
**ಮಯಾ ಪತ್ಯಾ ಜರದಷ್ಟಿರ್ಯಥಾಸಃ ।**
**ಭಗೊ ಅರ್ಯಮಾ ಸವಿತಾ ಪುರಂಧ್ರಿ**
**ರ್ಮಹ್ಯಂ ತ್ವಾ ದುರ್ಗಾರ್ಹಪತ್ಯಾಯ ದೇವಾಃ ॥**

ಋಗ್ವೇದಸಂಹಿತಾ, ೧೦।೮೫।೩.

ನಾನು ಸೌಭಾಗ್ಯಕ್ಕಾಗಿ ನಿನ್ನನ್ನು ಕೈಹಿಡಿಯುತ್ತಿದೇನೆ, ನಾನು ನಿನ್ನ ಗಂಡ, ನೀನು ನನ್ನೊಡನೆಯೆ ಮುದುಕಿಯಾಗು! ನಿನ್ನ ಮೂಲಕ ನಾನು ಗೃಹಸ್ವಾಮಿಯಾಗಲೆಂದು ಅರ್ಯಮಾ, ಸವಿತಾ ಮತ್ತು ಪುರಂಧ್ರಿ (ಪೂಷಾ) ದೇವತೆಗಳು ನಿನ್ನನ್ನು ನನಗೆ ಕೊಡುತಲಿದಾರೆ.

೫

**ಸಂಪ್ರಿಯೌ ರೊಚಿಷ್ಣೂ ಸುಮನಸ್ಯಮಾನೌ ॥**

ವಾಜಸನೇಯ ಸಂಹಿತಾ, ೧೨।೫೭.

**ಪಶ್ಯೆಮ ಶರದಃ ಶತಂ, ಜೀವೇಮ**
**ಶರದಃ ಶತಂ, ಶೃಣುಯಾಮ ಶರದಃ ಶತಮ್ ॥**

ವಾಜಸನೇಯ ಸಂಹಿತಾ, ೩೬।೨೪.

ನಾವಿಬ್ಬರೂ ಪರಸ್ಪರ ಪ್ರೀತಿಯುಕ್ತರಾಗೋಣ, ಉಜ್ವಲ ರಾಗೋಣ, ಪ್ರಸನ್ನಚಿತ್ತರಾಗೋಣ.

ನಾವು ನೂರು ವರುಷಗಳವರಿಗೂ ಒಬ್ಬರನ್ನೊಬ್ಬರು ನೋಡುವಂತೆಯೂ, ನೂರು ವರುಷಗಳ ತನಕ ಬದುಕಿರುವಂತೆಯೂ, ನೂರು ವರುಷಗಳ ತನಕ ಪರಸ್ಪರ ಸಂಭಾಷಣೆ ಮಾಡುವಂತೆಯೂ ಅನುಗ್ರಹವಾಗಲಿ.

(ಹೋಮಮಾಡುವಾಗ)

೬

**ಇಮಾಮಗ್ನಿಸ್ತ್ರಾಯತಾಂ ಗಾರ್ಹಪತ್ಯಃ**
**ಪ್ರಜಾಮಸ್ಮೈ ನಯತು ದೀರ್ಘಮಾಯುಃ ।**
**ಅಶೂನ್ಯೋಪಸ್ಥಾ ಜೀವತಾಮಸ್ತು ಮಾತಾ**
**ಪೌತ್ರಮಾನಂದಮಭಿವಿವೃಧ್ಯತಾಮಿಯಮ್ ॥**

ಹಿರಣ್ಯಕೇಶೀಯ ಗೃಹ್ಯಸೂತ್ರ, ೧।೧೯।೬.
ತುಲಃ—ಸಾಮಮಂತ್ರ ಬ್ರಾಹ್ಮಣ, ೧।೧।೧೧.

ಗಾರ್ಹಪತ್ಯಾಗ್ನಿಯು ಇವಳನ್ನು ಕಾಪಾಡಲಿ, ಇವಳ ಮಕ್ಕಳಿಗೆ ದೀರ್ಘಾಯುಸ್ಸನ್ನು ಈಯಲಿ! ಇವಳ ಮಡಿಲು ಶೂನ್ಯವಿರದೆ ಇರಲಿ. ಇವಳು ಮಕ್ಕಳ ತಾಯಿಯಾಗಿ ಬದುಕಲಿ! ಇವಳು ಮಕ್ಕಳನ್ನು ಹೆತ್ತು ಆನಂದವನ್ನು ಅನುಭವಿಸಲಿ.

೭

**ಸುಗನ್ನೊ ಪಂಥಾಂ ಪ್ರದಿಶನ್ನ ಏಹಿ**
**ಜ್ಯೊತಿಷ್ಮದ್ಧೇಹ್ಯಜರನ್ನ ಆಯುಃ ।**
**ಅಪೈತೊ ಮೃತ್ಯುರಮೃತಂ ನ ಆಗಾದ್**
**ವೈವಸ್ವತೊ ನೊ ಅಭಯಂ ಕೃಣೋತೂ ॥**

ಪಾರಸ್ಕರ ಗೃಹ್ಯಸೂತ್ರ, ೧।೫।೧೧.
ತುಲಃ—ಕಾಠಕ ಸಂಹಿತಾ, ೨।೧೫.

ಎಲೈ ಅಗ್ನಿಯೆ, ನೀನು ಅನುಕೂಲವಾದ ದಾರಿಯನ್ನು ತೋರಿ ನಮ್ಮ ಹತ್ತಿರಕ್ಕೆ ಬಾ, ನಮಗೆ ಜರೆರೋಗಗಳಿಲ್ಲದ ತೇಜಃಪುಂಜವಾದ ಆಯುಸ್ಸನ್ನು ಪ್ರದಾನಮಾಡು! ಮೃತ್ಯುವು ನಮ್ಮಿಂದ ಹಿಂತಿರುಗಲಿ ಮತ್ತು ಅಮೃತವು ಬರಲಿ, ಯಮನು ನಮಗೆ ಅಭಯವನ್ನು ಈಯಲಿ.

೮

(ಲಾಜಾಹೋಮದ ಕಾಲದಲ್ಲಿ)

**ಇಯಂ ನಾರ್ಯುಪಬ್ರೂತೇ ಲಾಜಾನಾವಪಂತಿಕಾ ।**
**ಆಯುಷ್ಮಾನಸ್ತು ಮೆ ಪತಿರೇಧನ್ತಾಂ ಜ್ಞಾತಯೊ ಮಮ ॥**

ಪಾರಸ್ಕರ ಗೃಹ್ಯಸೂತ್ರ, ೧।೬।೨.
ಸಾಮಮಂತ್ರ ಬ್ರಾಹ್ಮಣ, ೧।೨।೨.
ತೂಲಃ—ಅಥರ್ವ ವೇದ, ೧೪।೨।೬೩.

ಈ ಹೆಂಗಸು (ಅಗ್ನಿಯಲ್ಲಿ) ಅರಳನ್ನು ಹಾಕುತ್ತಾ ಹಾಕುತ್ತಾ ಹೇಳುತಲಿದಾಳೆ—"ನನ್ನ ಗಂಡನಿಗೆ ದೀರ್ಘಾಯುಸ್ಸು ಉಂಟಾಗಲಿ, ನನ್ನ ಜ್ಞಾತಿಗಳಿಗೆ ಏಳಿಗೆಯಾಗಲಿ!"

೯

**ಇಮಾಲ್ಲಾಜಾನಾ ವಪಾಮ್ಯಗ್ನೌ**
**ಸಮೃದ್ಧಿಕರಣಂ ತವ ।**
**ಮಮ ತುಭ್ಯಚ ಸಂವನನಂ**
**ತದಗ್ನಿರನುಮನ್ಯತಾಮಿಯಂ ಸ್ವಾಹಾ ॥**

ಪಾರಸ್ಕರ ಗೃಹ್ಯಸೂತ್ರ, ೧।೬।೨.
ಹಿರಣ್ಯಕೇಶೀಯ ಗೃಹ್ಯಸೂತ್ರ, ೧।೨೦।೩.

ನಿಮ್ಮ ಸಮೃದ್ಧಿ(ಏಳಿಗೆ)ಗಾಗಿ ನಾನು ಅಗ್ನಿಯಲ್ಲಿ ಅರಳನ್ನು ಹಾಕುತಲಿದೇನೆ, ನನ್ನ ಮತ್ತು ತಮ್ಮ ಪರಸ್ಪರ ಪ್ರೀತಿಯ ಹೆಣಿಕೆಯುಂಟಾಗಲಿ, ಇದನ್ನು ಅಗ್ನಿಯೂ (ಅವನ ಹೆಂಡತಿ) ಸ್ವಾಹಾ ದೇವಿಯೂ ಅನುಮೋದಿಸಲಿ.

೧೦

(ಶಿಲಾರೋಹಣದಲ್ಲಿ)

**ಆರೋಹೇಮಮಶ್ಮಾನಮ್**
**ಅಶ್ಮೇವತ್ವಂ ಸ್ಥಿರಾಭವ ।**

**ಅಭಿತಿಷ್ಠ ಪೃತನ್ಯತೊ**
**ಅವಬಾಧಸ್ವ ಪೃತನಾಯುತಃ ॥**

ಪಾರಸ್ಕರ ಗೃಹ್ಯಸೂತ್ರ, ೧।೭।೧.

ನೀನು ಈ ಬಂಡೆಯನ್ನು ಮೆಟ್ಟು, ಈ ಬಂಡೆಯಂತೆಯೆ ಸ್ಥಿರಳಾಗಿರುವವಳಾಗು, ಕದನಕಾಳಗಗಳಾಗಲಿ, ದಾಳಿಗಳು ನಡೆದುಹೋಗಲಿ ಎಲ್ಲವನ್ನೂ ಸಹಿಸಿಕೊಂಡು ಈ ಬಂಡೆಯಂತೆಯೆ ಕದಲದೆ ಇರುವವಳಾಗು.

## ೧೧

(ಸಪ್ತಪದಿಯನ್ನು ನಡೆಯುವಾಗ)

**ಓಂ ಈಷೆ ಏಕಪದಾಭವ,**
**ಸಾ ಮಾಮನುವ್ರತಾಭವ ।**
**ಊರ್ಜೆ ದ್ವಿಪದಾಭವ,**
**ಸಾ ಮಾಮನುವ್ರತಾಭವ ।**
**ರಾಯಸ್ಪೋಷಾಯ ತ್ರಿಪದಾಭವ,**
**ಸಾ ಮಾಮನುವ್ರತಾಭವ ।**
**ಮಾಯೊ ಭವಾಯ ಚತುಷ್ಪದಾಭವ,**
**ಸಾ ಮಾಮನುವ್ರತಾಭವ ।**
**ಪ್ರಜಾಭ್ಯಃ ಪಂಚಪದಾಭವ,**
**ಸಾ ಮಾಮನುವ್ರತಾಭವ ।**
**ಋತುಭ್ಯಃ ಷಟ್ಪದಾಭವ,**
**ಸಾ ಮಾಮನುವ್ರತಾಭವ ।**
**ಸಖೆ ಸಪ್ತಪದಾಭವ**
**ಸಾ ಮಾಮನುವ್ರತಾಭವ ।**

ಸಾಮವಿಧಾನ ಬ್ರಾಹ್ಮಣ, ೧।೨।೧೪.
ಆಶ್ವಲಾಯನ ಗೃಹ್ಯಸೂತ್ರ, ೧।೭।೧೯.

ಧಾನ್ಯಾಭಿವೃದ್ಧಿಗಾಗಿ (ನೇಗಿಲಕೋಲು) ಒಂದು ಹೆಜ್ಜೆಯನ್ನಿಡು ಮತ್ತು ಇದರಲ್ಲಿ ನನ್ನನ್ನು ಅನುಸರಿಸುವಳಾಗು.

ಬಲದ ಅಭಿವೃದ್ಧಿಗಾಗಿ ಎರಡನೆ ಹೆಜ್ಜೆಯನ್ನು ಇಡು, ಇದರಲ್ಲಿ ನನ್ನನ್ನು ಅನುಸರಿಸುವಳಾಗು.

ಧನದ ಹೆಚ್ಚಿಗೆಗಾಗಿ ಮೂರನೆ ಹೆಜ್ಜೆಯನ್ನು ಇಡು, ಇದರಲ್ಲಿ ನನ್ನನ್ನು ಅನುಸರಿಸು.

ಮಮತೆಯುಂಟಾಗುವುದಕ್ಕಾಗಿ ನಾಲ್ಕನೆ ಹೆಜ್ಜೆಯನ್ನು ಇಡು, ಇದರಲ್ಲಿ ನನ್ನನ್ನು ಅನುಸರಿಸು.

ಸಂತಾನಲಾಭಕ್ಕಾಗಿ ಐದನೆ ಹೆಜ್ಜೆಯನ್ನು ಇಡು, ಇದರಲ್ಲಿ ನನ್ನನ್ನು ಅನುಸರಿಸು.

ಅನುಕೂಲ ಋತುಗಳಿಗಾಗಿ (ಒಳ್ಳೆ ಕಾಲಕ್ಕಾಗಿ) ಆರನೆ ಹೆಜ್ಜೆಯನ್ನು ಇಡು, ಇದರಲ್ಲಿ ನನ್ನನ್ನು ಅನುಸರಿಸು.

ನಮ್ಮ ಪರಸ್ಪರ ಸ್ನೇಹಕ್ಕಾಗಿ ಏಳನೆ ಹೆಜ್ಜೆಯನ್ನು ಇಡು, ಇದರಲ್ಲಿ ನನ್ನನ್ನು ಅನುಸರಿಸು.

## ೧೨

(ಕನ್ಯೆಯ ಹೃದಯವನ್ನು ಮುಟ್ಟುವಾಗ)

**ಮಮ ವ್ರತೆ ತೆ ಹೃದಯಂ ದದಾಮಿ**
**ಮಮ ಚಿತ್ತಮನುಚಿತ್ತಂ ತೆ ಅಸ್ತು।**
**ಮಮ ವಾಚಮೇಕಮನಾ ಜುಷಸ್ವ**
**ಪ್ರಜಾಪತಿಸ್ತ್ವಾ ನಿಯುನಕ್ತು ಮಹ್ಯಮ್ ॥**

ಸಾಮಮಂತ್ರ ಬ್ರಾಹ್ಮಣ, ೧।೨।೨೧.
ಪಾರಸ್ಕರ ಗೃಹ್ಯಸೂತ್ರ, ೧।೮।೮೧.

ನನ್ನ ವ್ರತದಲ್ಲಿ ನಿನ್ನ ಹೃದಯವು ಇಡಲ್ಪಡಲಿ ಎಂದು ಪ್ರಾರ್ಥಿಸುತ್ತೇನೆ! ನಿನ್ನ ಚಿತ್ತವು ನನ್ನ ಚಿತ್ತಕ್ಕೆ ಅನುಕೂಲವಾಗಲಿ! ಒಂದೇ ಮನಸ್ಸುಳ್ಳವಳಾಗಿ ನನ್ನ ಮಾತನ್ನು ಪಾಲಿಸಬೇಕು! ಪ್ರಜಾಪತಿಯು ನನಗಾಗಿ ನಿನ್ನನ್ನು ಗೊತ್ತುಮಾಡಲಿ.

೧೩

**ಧ್ರುವಾ ದ್ಯೌಃ ಧ್ರುವಾ ಪೃಥಿವೀ**
**ಧ್ರುವಂ ವಿಶ್ವಮಿದಂ ಜಗತ್ ।**
**ಧ್ರುವಾಸಃ ಪರ್ವತಾ ಇಮೆ**
**ಧ್ರುವಾ ಪತಿಕುಲೆ ಇಯಮ್ ॥**

ತೂಲಃ—ಋಗ್ವೇದ ಸಂಹಿತಾ, ೧೦।೧೭೩।೪.
ಅಥರ್ವವೇದ ಸಂಹಿತಾ, ೬।೮೮।೧.
ಸಾಮಮಂತ್ರ ಬ್ರಾಹ್ಮಣ, ೧।೩।೭.

ಆಕಾಶವು ಧ್ರುವವು, ಈ ಭೂಮಿಯು ಧ್ರುವವು, ಈ ಪ್ರಪಂಚವೆಲ್ಲಾ ಶಾಶ್ವತವು, ಈ ಪರ್ವತಗಳೂ ಧ್ರುವಗಳು, ಹಾಗೆಯೇ ಈಕೆಯು ಗಂಡನ ಮನೆಯಲ್ಲಿ ಧ್ರುವಳು.

(ಕನ್ಯೆಯ ಹೇಳಿಕೆ)

**ಧ್ರುವಾಹಂ ಪತಿಕುಲೆ ಭೂಯಾಸಮ್ ।**

ನಾನು ಗಂಡನ ಮನೆಯಲ್ಲಿ ಧ್ರುವಳಾಗಿರುತ್ತೇನೆ.

೧೪

**ಬಧ್ನಾಮಿ ಸತ್ಯಗ್ರಂಥಿನಾ**
**ಮನಶ್ಚ ಹೃದಯಂಚ ತೆ ।**
**ಯದೇತದ್ ಹೃದಯಂ ತವ**
**ತದಸ್ತು ಹೃದಯಂ ಮಮ ।**
**ಯದೇತದ್ ಹೃದಯಂ ಮಮ**
**ತದಸ್ತು ಹೃದಯಂ ತವ ॥**

ಸಾಮಮಂತ್ರ ಬ್ರಾಹ್ಮಣ, ೧।೩।೮೯.

ಸತ್ಯದ ಗಂಟಿನಿಂದ ನಿನ್ನ ಹೃದಯವನ್ನೂ ಮನಸನ್ನೂ ಕಟ್ಟುತ್ತಲಿದೇನೆ, ಈ ನಿನ್ನ ಹೃದಯವೇ ನನ್ನ ಹೃದಯವಾಗಲಿ, ಮತ್ತು ಈ ನನ್ನ ಹೃದಯವು ನಿನ್ನ ಹೃದಯವಾಗಲಿ.

೧೧

**ಸಮ್ರಾಜ್ಞೀ ಶ್ವಶುರೆ ಭವ**
**ಸಮ್ರಾಜ್ಞೀ ಶ್ವಶ್ರ್ವಾಂ ಭವ।**
**ನನಾಂದರಿ ಚ ಸಂರಾಜ್ಞೀ**
**ಸಂರಾಜ್ಞೀ ಅಧಿ ದೇವೃಷು।**

ಋಗ್ವೇದ ಸಂಹಿತಾ, ೧೦।೮೫।೪೬.

ನೀನು ನಿನ್ನ ಮಾವನಿಂದ ಶೋಭನೆಯೆನ್ನಿಸಿಕೊಳ್ಳುವಳಾಗು, ನೀನು ನಿನ್ನ ಅತ್ತೆಯಿಂದ ಶೋಭನೆಯೆನ್ನಿಸಿಕೊ, ನೀನು ನಿನ್ನ ನಾದನಿಯರಿಂದ ಶೋಭನೆಯೆನ್ನಿಸಿಕೊ, ನೀನು ನಿನ್ನ ಮೈದುನರಿಂದ ಶೋಭನೆಯೆನ್ನಿಸಿಕೊ.

(ನೋಡುವವದಕ್ಕೆ ಬಂದವರಿಗೆ ನವವಧುವನ್ನು ತೋರುವಿಕೆ)

**ಸುಮಂಗಲೀರಿಯಂ ವಧೂ**
**ರಿಮಾಂ ಸಮೇತ ಪಶ್ಯತ।**
**ಸೌಭಾಗ್ಯಮಸ್ಮೈದತ್ವಾ**
**ಯಾಥಾಸ್ತು ವಿಪರೇತನ।**

ಋಗ್ವೇದ ಸಂಹಿತಾ, ೧೦।೮೫।೩೩.

ಈ ವಧುವು ಸುಮಂಗಲಿಯು, ಎಲ್ಲರೂ ನೋಡಿ, ಇವಳಿಗೆ ಸೌಭಾಗ್ಯ(ಆಶೀರ್ವಾದ)ವನ್ನು ಇತ್ತು ಬೀಳ್ಕೊಳ್ಳಿ.

೧೨

(ವಿವಾಹವಾದ ಮೇಲೆ ಗಂಡನ ಮನೆಗೆ ಹೋಗುವಾಗ ಗಾಡಿ ಹತ್ತುವ ಸಮಯದಲ್ಲಿ)

**ಪೂಷಾ ತ್ವೇತೋ ನಯತು ಹಸ್ತಗೃಹ್ಯಾ**
**ಶ್ವಿನಾ ತ್ವಾ ಪ್ರವಹತಾಂ ರಥೇನ।**
**ಗೃಹಾದ್ ಗಚ್ಛ ಗೃಹಪತ್ನೀ ಯಥಾಸೊ**
**ವಶನೀ ತ್ವಂ ವಿದಥಮಾವದಾಸಿ॥**

ಋಗ್ವೇದ ಸಂಹಿತಾ, ೧೦।೮೫।೨೬.

ಪೂಷಾ ದೇವರು (ಸೂರ್ಯ ದೇವರು) ನಿನ್ನ ಕೈಯನ್ನು ಹಿಡಿದು ಇಲ್ಲಿಂದ ಕರೆದೊಯ್ಯಲಿ, ಅಶ್ವಿನೀದೇವರಿಬ್ಬರೂ ಈ ರಥದ ಮೂಲಕ

ನಿನ್ನನ್ನು ಕರೆದೊಯ್ಯಲಿ, ನೀನು ನಿನ್ನ ಗಂಡನ ಮನೆಗೆ ಹೊರಡುವ ಹಾಗು, ಅಲ್ಲಿ ನೀನು ಗೃಹಸ್ವಾಮಿನಿಯಾಗುವಿ (ಗೃಹಾಧಿಕಾರಿಯಾಗುವೆ), ನೀನು ಅಲ್ಲಿ ವಶವರ್ತಿನಿಯಾಗಿ ಗಂಡನ ಮನೆಯಲ್ಲಿರುವರ ಸಂಗಡ ಬುದ್ಧಿಯಿಂದ ಸಂಭಾಷಣೆ ನಡೆಯಿಸು.

## ೧೮

(ನವ ವಧುವು ಗಂಡನ ಮನೆಯನ್ನು ಹೊಗುವುದು)

**ಇಹ ಪ್ರಿಯಂ ಪ್ರಜಯಾ ತೆ ಸಮೃಧ್ಯತಾಮ್**
**ಅಸ್ಮಿನ್ ಗೃಹೆ ಗಾರ್ಹಪತ್ಯಾಯ ಜಾಗೃಹಿ ।**
**ಏನಾಪತ್ಯಾ ತನ್ವಂ ಸಂಸೃಜಸ್ವಾ**
**ಧಾಜಿವ್ರೀ ವಿದಥಮಾ ವದಾತಃ ॥**

ಋಗ್ವೇದ ಸಂಹಿತಾ, ೧೦ । ೮೫ । ೨೭.

ಈ ಮನೆಯಲ್ಲಿ ಮಕ್ಕಳನ್ನು ಹೆತ್ತು ನಿನ್ನ ಪ್ರೀತಿಯು ಹೆಚ್ಚಲಿ, ಈ ಮನೆಯಲ್ಲಿ ಮನೆಯ ಯಜಮಾನಿಕೆಗಾಗಿ ಎಚ್ಚರದಿಂದ ಇರು, ಈ ನಿನ್ನ ಗಂಡನ ಜೊತೆಯಲ್ಲಿ ದೇಹವನ್ನು ಬೆರೆಸು, ಆಮೇಲೆ ಹಳಬಳಾಗಿ ತಿಳುವಳಿಕೆಯನ್ನು ಹೇಳುವಿ.

---

# ಉಪದೇಶ

೧

**ಯತ್ರ ನಾರ್ಯಸ್ತು ಪೂಜ್ಯಂತೆ ರಮಂತೆ ತತ್ರ ದೇವತಾಃ।**
**ಯತ್ರೈತಾಂಸ್ತು ನ ಪೂಜ್ಯಂತೆ ಸರ್ವಾಸ್ತತ್ರಾಫಲಾಃ ಕ್ರಿಯಾಃ॥**

ಮನು, ೩।೫೬.

ಹೆಂಗಸರು ಎಲ್ಲಿ ಸಮ್ಮಾನಿತರೋ ಅಲ್ಲಿ ದೇವತೆಗಳು ಪ್ರಸನ್ನರು; ಅವರು ಎಲ್ಲಿ ಸಮ್ಮಾನಿತರಲ್ಲವೋ ಅಲ್ಲಿನ ಕರ್ಮಗಳೆಲ್ಲಾ ವ್ಯರ್ಥ.

೨

**ಶೋಚಂತಿಜಾಮಯೊ ಯತ್ರ ವಿನಶ್ಯತ್ಯಾಶು ತತ್ಕುಲಮ್।**
**ನಶೋಚಂತಿತು ಯತ್ರೈತಾ ವರ್ದ್ಧತೆ ತದ್ಧಿ ಸರ್ವದಾ॥**

ಮನು, ೩।೫೭.

ಎಲ್ಲಿ ಉತ್ತಮ ಸೊಸೆಯರು ವ್ಯಸನಪಡುವರೊ ಅಲ್ಲಿ ಬೇಗನೆ ಆ ಕುಲವು ಬೀಡಾಗುವುದು, ಎಲ್ಲಿ ಅಂಥವರು ವ್ಯಸನವಿಲ್ಲದೆ ಇರುವರೊ ಅಂತಹ ಕುಲವು ಸರ್ವದಾ ಏಳಿಗೆಯುಲ್ಲಿರುವುದು.

೩

**ತಸ್ಮಾದೇತಾಃ ಸದಾಪೂಜ್ಯಾ ಭೂಷಣಾಚ್ಛಾದನಾಶನೈಃ।**
**ಭೂತಿಕಾಮೈರ್ನರೈರ್ನಿತ್ಯಂ ಸತ್ಕಾರ್ಯೇಷೂತ್ಸವೇಷುಚ॥**

ಮನು, ೩।೫೯.

ಆದುದರಿಂದ ಸಂಪತ್ತನ್ನು ಅಪೇಕ್ಷಿಸುವ ನರರು ಸದಾ ಅವರನ್ನು ಉಡಿಗೆ ತೊಡಿಗೆ ಮೃಷ್ಟಾನ್ನಗಳಿಂದ ಸನ್ಮಾನ ಮಾಡಬೇಕು, ಮತ್ತು

ಸತ್ಕಾರ್ಯ ಉತ್ಸವಕಾಲಗಳಲ್ಲಿಯೂ ಇನ್ನೂ ಅತಿಶಯವಾಗಿ ಮರ್ಯಾದೆಮಾಡಬೇಕು.

೪

**ಸಂತುಷ್ಟೋ ಭಾರ್ಯಯಾ ಭರ್ತಾ ಭರ್ತ್ರಾಭಾರ್ಯಾ ತಥೈವಚ ।**
**ಯಸ್ಮಿನ್ ಏವ ಕುಲೆ ನಿತ್ಯಂ ಕಲ್ಯಾಣಂ ತತ್ರವೈ ಧ್ರುವಮ್ ॥**

ಮನು, ೩।೬೦.

ಆವ ಮನೆಯಲ್ಲಿ ಗಂಡನು ಹೆಂಡರಿಂದ, ಹೆಂಡರು ಗಂಡನಿಂದ ನಿತ್ಯವೂ ಸಂತುಷ್ಟರಾಗಿರುವರೊ, ಆ ಮನೆಯಲ್ಲಿ ಕಲ್ಯಾಣವು ಧ್ರುವವಾಗಿರುವುದು.

೫

**ಸಾ ಭಾರ್ಯಾ ಯಾ ಪತಿಪ್ರಾಣಾ ಸಾ ಭಾರ್ಯಾ ಯಾ ಪ್ರಜಾವತೀ ।**
**ಮನೋವಾಕ್ಕರ್ಮಭಿಃಶುದ್ಧಾ ಪತಿದೇಶಾನುವರ್ತಿನೀ ॥**

ವ್ಯಾಸ ಸಂಹಿತಾ, ೧।೩೬.

ಪತಿಯಲ್ಲಿ ಪ್ರಾಣವನ್ನು ಇಟ್ಟುಕೊಂಡಿರುವಳೆ ಹೆಂಡತಿ, ಮಕ್ಕಳನ್ನು ಹೆತ್ತಿರುವಳೆ ಹೆಂಡರು, ಮನಸ್ಸು ಮಾತು ಕೆಲಸಗಳಲ್ಲಿ ಚೊಕ್ಕಟಳಾಗಿ ಗಂಡನೊಡನೆ ಇರುವಳೆ ಹೆಂಡತಿ.

೬

**ಛಾಯೇವಾನುಗತಾ ಸ್ವಚ್ಛಾ ಸಖೀವ ಹಿತಕರ್ಮಸು ।**
**ದಾಸೀವಾದಿಷ್ಟಕಾರ್ಯೇಷು ಭಾರ್ಯಾಭರ್ತ್ತುಃ ಸದಾಭವೇತ್**

ವ್ಯಾಸ ಸಂಹಿತಾ, ೧।೩೭.

ಹೆಂಡತಿಯು ನೆರಳಿನಂತೆ ಗಂಡನನ್ನು ಅನುಸರಿಸಬೇಕು, ಶುದ್ಧಳಾಗಿರಬೇಕು, ಅವನಿಗೆ ಹಿತವಾದ ಕೆಲಸದಲ್ಲಿ ಸಖಿಯಂತೆ ಸಹಾಯಕಳಾಗಬೇಕು ಮತ್ತು ಅವನು ಹೇಳಿದ ಕೆಲಸದಲ್ಲಿ ದಾಸಿಯಂತೆ ದುಡಿಯಬೇಕು.

೭

**ಸದಾ ಪ್ರಹೃಷ್ಟಯಾ ಭಾವ್ಯಂ ಗೃಹಕಾರ್ಯೇಷು ದಕ್ಷಯಾ।**
**ಸುಸಂಸ್ಕೃತೋಪಸ್ಕರಯಾ ವ್ಯಯೆ ಚಾಮುಕ್ತ ಹಸ್ತಯಾ॥**

ಮನು, ೫।೧೫೦.

ಅವಳು ಸದಾ ಸಂತೋಷದಿಂದ ಇರಬೇಕು, ಮನೆಗೆಲಸಗಳಲ್ಲಿ ದಕ್ಷಳಾಗಿರಬೇಕು, ಮನೆಯ ಸಾಮಗ್ರಿಗಳನ್ನು ಚೊಕ್ಕಟವಾಗಿಟ್ಟಿರಬೇಕು ಮತ್ತು ಮುಚ್ಚಬೇಕಾದವುಗಳನ್ನು ಮುಚ್ಚಿಟ್ಟಿರಬೇಕು ಮತ್ತು ವ್ಯಯ ವಿಷಯದಲ್ಲಿ ಬಿಚ್ಚಿದಕೈ ಇರಬಾರದು (ಹಿಡಿತವಿರಬೇಕು).

೮

**ಪತಿಪ್ರಿಯಹಿತೆ ಯುಕ್ತಾ ಸ್ವಾಚಾರಸಂಯುತೇಂದ್ರಿಯಾ।**
**ಇಹಕೀರ್ತಿಮವಾಪ್ನೋತಿ ಪ್ರೇತ್ಯಚಾನುಪಮಂ ಸುಖಮ್॥**

ಯಾಜ್ಞವಲ್ಕ್ಯ ಸಂಹಿತಾ, ೧।೮೭.

ಗಂಡನ ಒಳ್ಳಿತಲ್ಲಿಯೆ ಯುಕ್ತಳಾಗಿ ಮತ್ತು ತಮ್ಮ ನಡವಳಿಕೆಯಲ್ಲಿರುವಳಾಗಿ ಹಿಡಿತವಾದ ಇಂದ್ರಿಯ ಚಾಲಿನಿಂದ ಇರುತ್ತಾ ಇರುವಳು ಇಹಲೋಕದಲ್ಲಿ ಕೀರ್ತಿಯನ್ನು ಪಡೆಯುತ್ತಾಳೆ, ಪರಲೋಕದಲ್ಲಿ ಸಾಟಿಯಿಲ್ಲದ ಸೌಖ್ಯವನ್ನು ಹೊಂದುವಳು.

೯

**ಸ್ತ್ರೀಭಿಃ ಭರ್ತೃವಚಃ ಕಾರ್ಯಂ ಏಷಧರ್ಮಃ ಪರಃ ಸ್ತ್ರಿಯಾಃ।**
**ಸದ್ವೃತ್ತಚಾರಿಣೀಂ ಪತ್ನೀಂ ತ್ಯಕ್ತ್ವಾ ಪತತಿ ಧರ್ಮತಃ॥**

ಯಾಜ್ಞವಲ್ಕ್ಯ ಸಂಹಿತಾ, ೧।೧೧.

ವ್ಯಾಸ ಸಂಹಿತಾ, ೨।೪೭.

ಹೆಂಗಸರು ಗಂಡನ ಮಾತನ್ನು ಪಾಲಿಸಬೇಕು, ಇದೇ ಅವರಿಗೆ ಪರಮ ಧರ್ಮವು, ಸದಾಚಾರಶೀಲಳಾದ ಹೆಂಡತಿಯನ್ನು ಬಿಟ್ಟರೆ ಧರ್ಮದಿಂದ ಗಂಡನು ಪತಿತನಾಗುತ್ತಾನೆ.

೧೦

**ಅನ್ಯೋನ್ಯಸ್ಯಾ ವ್ಯಭಿಚಾರೋಭವೇದಾಮರಣಾಂತಿಕಃ।**
**ಏಷಧರ್ಮಃ ಸಮಾಸೇನ ಜ್ಞೇಯಃ ಸ್ತ್ರೀಪುಂಸಯೋಃ ಪರಃ॥**

ಮನು, ೯।೧೦೧.

ಗಂಡ ಹೆಂಡರು ಇಬ್ಬರೂ ಸಾಯುವತನಕ ಒಬ್ಬರನ್ನೊಬ್ಬರು ಮೀರಿ ನಡೆಯಬಾರದು. ಒಟ್ಟಿನಮೇಲೆ ಇಷ್ಟೇ ಇವರ ಪರಮ ಧರ್ಮವು.

೧೧

**ತಥಾ ನಿತ್ಯಂ ಯತೆಯಾತಾಂ ಸ್ತ್ರೀಪುಂಸೌ ತು ಕೃತಕ್ರಿಯೌ।**
**ಯಥಾನಾಭಿಚರೇತಾಂ ತೌ ವಿಯುಕ್ತಾವಿತರೇತರಮ್॥**

ಮನು, ೯।೧೦೨.

ವಿವಾಹವಾದಮೇಲೆ ಗಂಡ ಹೆಂಡರು ಬೇರೆಯಾಗಿರಬೇಕಾಗಿ ಬಂದು, ಆರೂ ಬೇರೆ ಜನದೊಡನೆ ಬೆರೆದು ಮೋಸ ಮಾಟಗಳನ್ನು ಮಾಡಲಾಗದು, ಈ ವಿಷಯದಲ್ಲಿ ಅವರಿಬ್ಬರೂ ಸದಾ ಜತನವಾಗಿರಬೇಕು.

# ಗೃಹಿಣೀ ಧರ್ಮ

## ವಾತ್ಸ್ಯಾಯನ ಸೂತ್ರ

## ಚತುರ್ಥ ಅಧಿಕರಣ—ಪ್ರಥಮ ಅಧ್ಯಾಯ

**ಭಾರ್ಯೈಕಚಾರಿಣೀ ಗೂಢವಿಸ್ರಂಭಾ ದೇವವತ್ ಪತಿಂ ಆನುಕೂಲ್ಯೇನ ವರ್ತೇತ ॥ ೧ ॥**

ಹೆಂಡತಿಯು ಗಂಡನೊಬ್ಬನಲ್ಲಿ ನಡೆದುಕೊಳ್ಳುವಳಾಗಿ ವಿಶೇಷ ನಂಬಿಕೆಯಾದವಳಾಗಿ ದೇವರ ಹಾಗೆ ಗಂಡನ ಅನುಕೂಲವನ್ನು ತಿಳಿದು ಇರಬೇಕು.

**ತನ್ಮತೇನ ಕುಟುಂಬ ಚಿಂತಾಮಾತ್ಮನಿ ಸಂನಿವೇಶಯೇತ್ ॥ ೨ ॥**

ಅವಳು ಅವನ ಮತಕ್ಕೆ ಅನುಸಾರವಾಗಿ ಸಂಸಾರದ ಚಿಂತೆಯನ್ನು ತಾನು ತೆಗೆದುಕೊಳ್ಳತಕ್ಕದ್ದು.

**ವೇಶ್ಮ ಚ ಶುಚಿ ಸುಸಂಮೃಷ್ಟಸ್ಥಾನಂ<br>ವಿರಚಿತ ವಿವಿಧ ಕುಸುಮಂ ಸಂಶ್ಲಕ್ಷ್ಣಭೂಮಿತಲಂ<br>ಹೃದ್ಯದರ್ಶನಂ ತ್ರಿಷವಣಾಚರಿತ ಬಲಿಕರ್ಮ<br>ಪೂಜಿತ ದೇವಾಯತನಂ ಕುರ್ಯಾತ್ ॥ ೩ ॥**

ಅವಳು ಚಂದವಾಗಿ ಮನೆಯನ್ನು ತೊಳೆಯಬೇಕು, ಮತ್ತು ಚೊಕ್ಕಟವಾಗಿಡಬೇಕು, ನೆಲವು ನುಣುಪಾಗಿ ಮೆರಗುವಂತೆ ಮಾಡಬೇಕು, ಅವಳು ಅಲ್ಲಿ ಸರಿಯಾದ ಸ್ಥಳಗಳಲ್ಲಿ ಹೂವಿನ ರಾಶಿಗಳನ್ನು ಚೆಲ್ಲಬೇಕು, ಮನೆಯನ್ನು ನೋಡಿದರೆ ಹೃದಯಂಗಮವಾಗಿರುವಂತೆ ಮಾಡಬೇಕು, ತ್ರಿಸಂಧ್ಯೆಗಳಲ್ಲಿ ಆ ಮನೆಯಲ್ಲಿ ಊಟದ ಪದಾರ್ಥಗಳು ಕೊಡಲ್ಪಡಬೇಕು, ಮತ್ತು ದೇವರ ಮನೆಯಲ್ಲಿ ಪೂಜೆಯು ಕ್ರಮವು ನಡೆಯುವಂತೆ ನೋಡಿಕೊಳ್ಳಬೇಕು.

**ನಹ್ಯತೊನ್ಯದ್ ಗೃಹಸ್ಥಾನಾಂ**
**ಚಿತ್ತಗ್ರಾಹಕಮಸ್ತೀತಿ ಗೋನರ್ದೀಯಃ ॥ ೪ ॥**

ಗೋನರ್ದ ಆಚಾರ್ಯರು ಹೇಳುತ್ತಾರೆ, ಇಂಥ ಮನೆಗಿಂತ ಗೃಹಸ್ಥರಿಗೆ ಮನಸನ್ನು ಬಿಗಿಹಿಡಿಯುವ ಸ್ಥಳವು ಬೇರೊಂದೂ ಇಲ್ಲ.

**ಗುರುಷು ಮಂತ್ರವಶ್ಯೇಷು ಭೃತ್ಯವರ್ಗೇಷು**
**ನಾಯಕ ಭಗಿನೀಷು ಚ ಯಥಾರ್ಹಂ ಪ್ರತಿಪತ್ತಿಃ ॥ ೫ ॥**

ಒಳ್ಳೆ ಪರಾಮರ್ಶದಿಂದ ಸ್ವಾಧೀನಕ್ಕೆ ಬರುವ ಗುರುಜನಗಳಾದ ಅತ್ತೆಮಾವಂದಿರಲ್ಲಿಯೂ, ಆಳುಕಾಳುಗಳಲ್ಲಿಯೂ, ಗಂಡನ ಅಕ್ಕತಂಗಿಯರಲ್ಲಿಯೂ, ಅವರ ಗಂಡಂದಿರೊಡನೆಯೂ ಯಥಾರೀತಿಯಾಗಿ ನಡೆದುಕೊಳ್ಳತಕ್ಕದ್ದು.

**ಪರಿಪೂತೇಷು ಚ ಹರಿತಶಾಕ**
**ವಪ್ರಾನ್, ಇಕ್ಷುಸ್ತಂಭಾನ್, ಜೀರಕ**
**ಸರ್ಷಪಾಜಮೋದ ಶತಪುಷ್ಪ**
**ತಮಾಲ ಗುಲ್ಮಾನ್ ಕಾರಯೇತ್ ॥ ೬ ॥**

ಅವಳು ಮನೆಯಲ್ಲಿ ಚೊಕ್ಕಟವಾದ ಸ್ಥಳಗಳಲ್ಲಿ ಹಸರು ಸೊಪ್ಪು ಮುಂತಾದವುಗಳ ಹೊಲ, ಕಬ್ಬಿನ ತೋಟ, ಜೀರಿಗೆ, ಸಾಸುವೆ, ಅಜವಾನ, ಕಾಡು ಸಬ್ಬಸಿಗೆ(ಶತಪುಷ್ಪ)ಗಳನ್ನು ಹಾಕಬೇಕು, ಮತ್ತು ತಮಾಲ (ಹೊಂಗೆ?) ಗುಲ್ಮ(ಲತಾಗೃಹ)ಗಳನ್ನು ಮಾಡಬೇಕು.

**ಕುಬ್ಜಕಾಮಲಕ ಮಲ್ಲಿಕಾಜಾತೀ**
**ಕುರಂಟಕ ನವಮಾಲಿಕಾ ತಗರ**
**ನಂದ್ಯವರ್ತ ಜಪಾ ಗುಲ್ಮಾನ್ ಅನ್ಯಾಂಶ್ಚ**
**ಬಹುಪುಷ್ಪಾನ್, ವಾಲಕೋಶೀರಕಪಾತಾಲಿ**
**ಕಾಶ್ಚ, ವೃಕ್ಷವಾಟಿಕಾಯಾಂ ಚ ಸ್ಥಂಡಿಲಾನಿ**
**ಮನೋಜ್ಞಾನಿ ಕಾರಯೇತ್ ॥ ೭ ॥**

ಅವಳು ಕಿರನೆಲ್ಲಿ, ಮಲ್ಲಿಗೆ, ಜಾಜಿ, ಗೋರಂಟೆ, ವೀರಜಾಜಿ (ಹೆಜ್ಜಾಜಿ), ತಗರ (ಮೂರುಸುತ್ತಿನ ಕಸಿ ಮಲ್ಲಿಗೆ) ಮಲ್ಲಿಗೆ, ನಂದಿ

ಬಟ್ಟಲ, ದಾಸವಾಳ ಮುಂತಾದ ಹಲವು ಗುಲ್ಮಗಳನ್ನೂ, ಹೂವು ಗಳನ್ನೂ, ಗಂಟುಭಾರಂಗಿ······ಳನ್ನೂ, ಗಿಡಗಳಿಗೆ ಪಾತಿಗಳನ್ನೂ, ಮನೋಹರಗಳಾದ ಜಗುಲಿಗಳನ್ನೂ ಮಾಡಿಸಬೇಕು.

**ಮಧ್ಯೆ ಕೂಪಂ ವಾಪೀಂ ದೀರ್ಘಿಕಾಂ ವಾ ಕಾರಯೇತ್ ॥ ೮ ॥**

ಅವಳು ಇವುಗಳ ನಡುವೆ ಬಾವಿಯನ್ನೊ, ಕುಂಟೆಯನ್ನೊ, ಕಾಲುವೆಯನ್ನೊ ಮಾಡಿಸಬೇಕು.

**ಭೋಜನೆ ರುಚಿತಮಿದಂ ಅಸ್ಮೈ**
**ದ್ವೇಷ್ಯಮಿದಮ್ ಪಥ್ಯಮಿದಮ್**
**ಅಪಥ್ಯಮಿದಮ್ ಇತಿ ಚ ವಿದ್ಯಾತ್**
**ತ್ಯಾಗೋಪಾದನಾರ್ಥಮ್ ॥ ೧೦ ॥**

ಭೋಜನ ಕಾಲದಲ್ಲಿ ಯಾರಿಗೆ ಯಾವುದು ರುಚಿ, ಯಾವದು ಸರಿ ಬಾರದು, ಯಾರಿಗೆ ಯಾವುದು ಒಳ್ಳೆಯದು, ಕೆಟ್ಟದ್ದು ಇವೆಲ್ಲವನ್ನೂ ಅವಳು ತಿಳಿದುಕೊಳ್ಳಬೇಕು, ಮತ್ತು ಅದಕ್ಕೆ ಅನುಸಾರವಾಗಿ ಸ್ವೀಕಾರ ಪರಿತ್ಯಾಗಗಳನ್ನೂ ಮಾಡತಕ್ಕದ್ದು.

**ಅತಿವ್ಯಯಂ ಅಸದ್ವ್ಯಯಂ ವಾ**
**ಕುರ್ವಾಣಂ ರಹಿಸಿ ಬೋಧಯೇತ್ ॥ ೧೪ ॥**

ಗಂಡನು ಹೆಚ್ಚಿನ ಖರ್ಚು ಅಥವ ಅನ್ಯಾಯವಾಗಿ ಖರ್ಚು ಮಾಡುತ್ತಿದ್ದರೆ ಅವನಿಗೆ ಇತರರು ಇಲ್ಲದೆ ಇರುವ ಕಡೆಯಲ್ಲಿ ತಿಳಿಯು ಹೇಳತಕ್ಕದ್ದು.

**ಆವಾಹೆ ವಿವಾಹೆ ಯಜ್ಞೆ ಗಮನಂ**
**ಸಖೀಭಿಃ ಸಹ ಗೋಷ್ಠೀಂ**
**ದೇವತಾಭಿಗಮನಂ ಇತ್ಯನುಜ್ಞಾತಾ ಕುರ್ಯಾತ್**
**॥ ೧೫ ॥**

ಗಂಡನ ಸಮ್ಮತಿಯನ್ನು ಪಡೆದು ಮದುವೆಯ ಕಾಲದಲ್ಲಿ ಕನ್ಯೆಯ ಮನೆಗೆ ಆಗಲಿ, ವರನ ಮನೆಗೆ ಆಗಲಿ, ಯಜ್ಞದರ್ಶನಕ್ಕೆ ಆಗಲಿ ಸಂಗಾತಿಯರೊಡಗೂಡಿ ಹೋಗಬೇಕು, ಮತ್ತು ಹೀಗೆಯೇ

ಜೊತೆಯಲ್ಲಿಯೇ ಊಟೋಪಚಾರ ಮತ್ತು ದೇವರ ಸಂದರ್ಶನಗಳಿಗೆ ಹೋಗತಕ್ಕದ್ದು.

**ಸರ್ವಕ್ರೀಡಾಸು ತದಾನುಲೋಮ್ಯೇನ ಪ್ರವೃತ್ತಿಃ ॥ ೧೬ ॥**

ಗಂಡನ ಸಂತೋಷಕ್ಕೆ ಅನುಸಾರವಾಗಿ ಎಲ್ಲಾ ಕ್ರೀಡೆಗಳಲ್ಲಿಯೂ ಬೆರೆಯಬಹುದು.

**ಪಶ್ಚಾತ್ ಸಂವೇಶನಂ ಪೂರ್ವಮುತ್ಥಾನಮ್**
**ಅನವಬೋಧನಂಚ ಸುಪ್ತಸ್ಯ ॥ ೧೭ ॥**

ಗಂಡನು ಮಲಗಿದ ಮೇಲೆ ಹೆಂಡತಿಯು ಮಲಗತಕ್ಕದ್ದು, ಗಂಡನು ಹಾಸಿಗೆಯನ್ನು ಬಿಡುವುದಕ್ಕೆ ಮುಂಚೆ ಹೆಂಡತಿಯು ಬಿಡತಕ್ಕದ್ದು. ಗಂಡನು ನಿದ್ರಿಸುತ್ತಿದ್ದರೆ ಅವನನ್ನು ಎಚ್ಚರಿಸಬಾರದು.

**ಮಹಾನಸಂ ಸುಗುಪ್ತಂ ಸ್ಯಾದ್ ದರ್ಶನೀಯಂಚ ॥ ೧೮ ॥**

ಅವಳ ಅಡಿಗೆಯ ಮನೆಯು ಸುರಕ್ಷಿತವಾಗಿಯೂ, ನೋಡಲಿಕ್ಕೆ ಚಂದವಾಗಿಯೂ ಇರತಕ್ಕದ್ದು.

**ನಾಯಕಾ ಪರೇಧೇಷು ಕಿಂಚಿತ್**
**ಕಲುಷಿತಾ ನಾತ್ಯರ್ಥಂ ನಿರ್ವದೇತ್ ॥ ೧೯ ॥**

ಗಂಡನು ತಪ್ಪು ಕೆಲಸ ಮಾಡಿದ್ದರೆ ಅವಳು ಕೋಪವೇನೊ ಕೊಂಚ ಮಾಡಬಹುದು, ಆದರೆ ಬಹಳ ಹೆಚ್ಚಿನ ತಿರಸ್ಕಾರವನ್ನು ಮಾಡಬಾರದು.

**ದುರ್ವ್ಯಾಹೃತಂ ದುರ್ನಿರೀಕ್ಷಿತಮ್**
**ಅನ್ಯತೊ ಮಂತ್ರಣಂ ದ್ವಾರದೇಶಾವ**
**ಸ್ಥಾನಂ ನಿರೀಕ್ಷಣಂ ವಾ ನಿಷ್ಕುಟೇಷು**
**ಮಂತ್ರಣಂ ವಿವಿಕ್ತೇಷು**
**ಚಿರಾವಸ್ಥಾನಂ ಇತಿ ವರ್ಜಯೇತ್ ॥ ೨೦ ॥**

ಅವಳು ಈ ಕೆಳಗೆ ಹೇಳುವವನ್ನು ಬಿಡತಕ್ಕದ್ದು:—

ಕೆಟ್ಟ ಮಾತುಗಳನ್ನು ಉಚ್ಚರಿಸುವುದು, ಹೇಸಿಗೆಯಾಗುವಂತೆ ಕಾಣಿಸಿಕೊಳ್ಳುವುದು, ಮುಖವನ್ನು ತಿರುಗಿಸಿಕೊಂಡು ಮಾತನಾಡು

ವುದು, ಹೊರಬಾಗಲಲ್ಲಿಯೆ ನಿಂತಿರುವುದು ಅಥವಾ ಅಲ್ಲೆಯೆ ನಿಂತು ಮಾತನಾಡುವುದು, ಮತ್ತು ಸಿಟ್ಟಿಸಿ ನೋಡುವುದು, ಮನೆಯ ಹತ್ತಿರದ ತೋಟದಲ್ಲಿ ಮಾತನಾಡುವುದು ಮತ್ತು ಆರೂ ಇಲ್ಲದ ಕಡೆ ಬಹಳ ಹೊತ್ತು ಇರುವುದು.

**ನಾಯಕಸ್ಯ ವ್ರತಮುಪವಾಸಂಚ।**
**ಸ್ವಯಮಪಿ ಕರಣೇನ ಅನುವರ್ತೇತ ॥ ೨೬ ॥**

ಗಂಡನು ವ್ರತ ಉಪವಾಸಗಳನ್ನು ಮಾಡುತಿದ್ದರೆ ತಾನೂ ಹಾಗೆಯೆ ಮಾಡತಕ್ಕದ್ದು.

**ಮೃದ್ವಿದುಳ ಕಾಷ್ಟ ಚರ್ಮ ಲೋಹ।**
**ಭಾಂಡಾನಾಂ ಚ ಕಾಲೆ ಸಮರ್ಘ ಗ್ರಹಣಂ ॥ ೨೭ ॥**

ಅವಳು ಮಡಕೆ, ಗುದಾಣ, ಬೆತ್ತದ, ಮರದ, ಚರ್ಮದ, ಕಬ್ಬಿಣದ ಪೆಟ್ಟಿಗೆ ಪೆರಾರಿಗಳನ್ನು ಕಾಲದಲ್ಲಿ, ಸರಿಯಾದ ಬೆಲೆಯಿಂದ ಸಂಗ್ರಹಿಸತಕ್ಕದ್ದು.

**ಮೂಲಕಾಲೂಕ ಪಾಲಂಕೀ ದಮನಕಾಮ್ರಾ**
**ತಕೋರ್ವಾರೂಕ ತ್ರಪೂಸ ವಾರ್ತಾಕ**
**ಕೂಷ್ಮಾಂಡಾಲಾಮ್ರೂ.... ಪ್ರಭೃತೀನಾಂಚ**
**ಬೀಜಗ್ರಹಣಂ ಕಾಲೆ ವಾಪಶ್ಚ ॥ ೨೯ ॥**

ಮುಲ್ಲಂಗಿ, ಕಚೋರ, ಕುಂದುರೂ.... ಅಮಟೆ, ಕುಂಬಳ, ಬೆಂಡೆ, ಬದನೆ, ಹೀರೆ, ಗೋವರ್ಧನ.... ಮುಂತಾದವುಗಳನ್ನೂ ಸಮಸ್ತ ಔಷಧಿ ಸಾಮಗ್ರಿಗಳನ್ನು ಯಥಾಕಾಲದಲ್ಲಿ ಬೀಜಸಂಗ್ರಹ ಮತ್ತು ಬೀಜವನ್ನು ಹಾಕುವುದನ್ನು ಅವಳು ನೋಡಿಕೊಳ್ಳಬೇಕು.

**ಸ್ವಯಂಚ ಸಾರಸ್ಯ ಪರೇಭ್ಯೋ**
**ನಾಖ್ಯಾನಂ ಭರ್ತೃ ಮಂತ್ರಿ ತಸ್ಯಚ ॥ ೩೦ ॥**

ತಾನಾಗಿಯೆ ಅಸಲನ್ನು ಪರರಲ್ಲಿ ಬಿಟ್ಟುಕೊಡಬಾರದು ಮತ್ತು ಗಂಡನ ಮಾತನ್ನು ಪರರಿಗೆ ಹೇಳಬಾರದು.

**ಸಾಂವತ್ಸರಿಕಂ ಆಯಂ ಸಂಖ್ಯಾಯ**
**ತದನುರೂಪಂ ವ್ಯಯಂ ಕುರ್ಯಾತ್ ॥ ೩೦ ॥**

ವರ್ಷದ ಸಂಪಾದನೆಯೆಷ್ಟು ಎಂಬುದನ್ನು ಲೆಖ್ಖಮಾಡಿ ಅದಕ್ಕೆ ತಕ್ಕಂತೆ ಖರ್ಚನ್ನು ಮಾಡುವುದು.

**ಭೋಜನಾವಸಿಷ್ಟಾದ್ ಗೋರಸಾತ್**
**ಸಾರಗ್ರಹಣಂ ತೈಲಗುಡಯೋಃ ॥ ೩೩ । ೧ ॥**

ಉಂಡಾದಮೇಲೆ ಉಳಿದ ಹಾಲನ್ನೂ, ಎಣ್ಣೆ, ಬೆಲ್ಲಾ ಮುಂತಾದವುಗಳನ್ನೂ ಎತ್ತಿ ಅವುಗಳ ಸಾರವನ್ನು ಗ್ರಹಿಸಬೇಕು.

**ಕರ್ಪಾಸಸ್ಯ ಸೂತ್ರಕರ್ತನಂ ವಾನಮ್ ॥ ೩೩ । ೨ ॥**

ಹತ್ತಿಯನ್ನು ಸೂತು (ವಸ್ತ್ರಗಳನ್ನಾಗಿ) ನೇಯಬೇಕು.

**ಶಿಕ್ಯಾರಜ್ಜು ಪಾಶ ವಲ್ಕಲ ಸಂಗ್ರಹಣಮ್**
**॥ ೩೩ । ೩ ॥**

ಅವಳು ನೆಲುವು, ಹಗ್ಗ, ಕುಣಿಕೆ, ನಾರುಮೊಟ್ಟೆ ಮುಂತಾದವುಗಳನ್ನು ಜಮಾಯಿಸಿಡಬೇಕು.

**ಕುಟ್ಟನ ಕಂಡನಾವೇಕ್ಷಣಮ್ ॥ ೩೩ । ೪ ॥**

ಭತ್ತ ಮುಂತಾದವುಗಳನ್ನು ಕುಟ್ಟುವುದು, ಚೊಕ್ಕಟಮಾಡುವುದೂ ಇವನ್ನು ಉಸ್ತುವಾರಿ ಮಾಡತಕ್ಕದ್ದು.

**ಆಚಾಮ ಮಂಡ ತೂಷ ಕಣ**
**ಕುಟ್ಯಂಗಾರಾಣಾಮ್ ಉಪಯೋಜನಮ್**
**॥ ೩೩ । ೫ ॥**

ಅವಳು ಗಂಜಿ, ಹೊಟ್ಟು, ತವುಡು, ಸುಚ್ಚು ಮತ್ತು ಇದ್ದಲು ಇವುಗಳನ್ನು ಕಳೆಯದೆ ಸರಿಯಾದ ಕಾರ್ಯಗಳಲ್ಲಿ ಉಪಯೋಗಿಸತಕ್ಕದ್ದು.

**ಭೃತ್ಯ ವೇತನ ಭರಣ ಜ್ಞಾನಮ್ ॥ ೩೩ । ೬ ॥**

ಆಳುಗಳ ಸಂಬಳ, ಊಟ ಮುಂತಾದವುಗಳಲ್ಲಿನ ವಿಚಾರಣೆ ಜ್ಞಾನವು ಅವಳಿಗೆ ಇರಬೇಕು.

**ಕೃಷಿ ಪಶು ಪಾಲನ ಚಿಂತಾ**
**ವಾಹನ ವಿಧಾನ ಯೋಗಾಃ ॥ ೩೩ । ೭ ॥**

ಮನೆಯ ವ್ಯವಸಾಯ, ದನಕರುಗಳ ಪೋಷಣೆ, ವಾಹನಗಳ ರೀತಿಯ ಪ್ರಕಾರ ಇಡುವುದು ಅವಳು ನೋಡತಕ್ಕದ್ದು.

**ಮೇಷ ಕುಕ್ಕುಟ ಲಾವಕ ಶಾರಿಕಾ ಪರಭೃತ**
**ಮಯೂರ ವಾನರ ಮೃಗಾಣಾಂ ಅವೇಕ್ಷಣಮ್**
**॥ ೩೩ । ೮ ॥**

ಮೇಕೆ, ಕೋಳಿ, ಲಾವಕ್ಕಿ, ಗೊರವಂಕೆ, ಕೋಗಿಲೆ, ನವಿಲು, ಕೋತಿ, ಜಿಂಕೆ ಮುಂತಾದವುಗಳನ್ನು ಅವಳು ನೋಡಿಕೊಳ್ಳತಕ್ಕದ್ದು.

**ದೈವಸಿಕಾಯವ್ಯಯ ಪಿಂಡೀಕರಣಮ್**
**ಇತಿ ಚ ವಿದ್ಯಾತ್ ॥ ೩೩ । ೯ ॥**

ಅವಳು ದಿನಚರಿಯ ಆಯವ್ಯಯವನ್ನು ಸೇರಿಸಿ ನೋಡಿಕೊಳ್ಳತಕ್ಕದ್ದು.

**ತಜ್ಜಘನ್ಯಾನಾಂ ಚ ಜೀರ್ಣವಾಸಸಾಂ ಸಂಚಯಃ**
**ತೈರ್ವಿವಿಧರಾಗೈಃ ಶುದ್ಧೈರ್ವಾ ಕೃತಕರ್ಮಣಾಮ್**
**ಪರಿಚಾರಕಾಣಾಮ್ ಅನುಗ್ರಹಃ ಮಾನಾರ್ಥೇಷು**
**ಚ ದಾನಮ್ ಅನ್ಯತ್ರವೋಪಯೋಗಃ ॥ ೩೪ ॥**

ಅವಳು ಗಂಡನು ಉಪಯೋಗಿಸಿ ಹಳೆದಾದ ಬಟ್ಟೆಗಳನ್ನು ಜಮಾಯಿಸಬೇಕು, ಮತ್ತು ಅವುಗಳನ್ನು ಬಣ್ಣಬಣ್ಣವಾಗಿ ರಂಗುಹಾಕಿಯೊ, ಮಡಿಮಾಡಿಯೊ, ಹೇಳಿದ ಕೆಲಸವನ್ನು ಸಮರ್ಪಕವಾಗಿ ಮಾಡಿದ ಆಳುಗಳಿಗೆ ಕೊಡುವುದು, ಅಥವ ಆದರವನ್ನು ತೋರಿಸುವುದಕ್ಕಾಗಲಿ ಕೊಡುವುದು, ಇಲ್ಲವೆ ಇನ್ನಾವದಾದರೂ ಕೆಲಸಕ್ಕೆ ಉಪಯೋಗಿಸಬೇಕು.

**ನಾಯಕ ಮಿತ್ರಾಣಾಂ ಚ ಸ್ರಗನು ಲೇಪನ ತಾಂ**
**ಬೂಲದಾನೈಃ ಪೂಜ್ಯಂ ನ್ಯಾಯತಃ ॥ ೩೭ ॥**

ಅವಳು ನ್ಯಾಯವಾದಂತೆ ಗಂಡನ ಸ್ನೇಹಿತರಿಗೆ ಹೂವು, ಗಂಧ, ತಾಂಬೂಲಗಳನ್ನು ಕೊಟ್ಟು ಗೌರವಿಸಬಹುದು.

**ಶ್ವಶ್ರೂ ಶ್ವಶುರ ಪರಿಚರ್ಯಾ ॥ ೩೭ । ೧ ॥**

ಅವಳು ಅತ್ತೆಮಾವಂದಿರ ಸೇವೆಯನ್ನು ಮಾಡಬೇಕು.

**ತತ್ಪಾರತಂತ್ರ್ಯಮ್ ಅನುತ್ತರವಾದಿತಾ ಪರಿಮಿತಾಪ್ರಚಂಡಾಲಾಪಕರಣಮ್, ಅನುಚ್ಚೈರ್ಹಾಸಃ ॥ ೩೭ । ೨ ॥**

ಅವಳು ಅವರ ಅಧೀನದಲ್ಲಿಯೆ ಇರಬೇಕು, ಅವರೊಡನೆ ಮಾತಿ ಮಾತಿಗೂ ಉತ್ತರವನ್ನು ಜೋಡಿಸಬಾರದು, ಅವರ ಎದುರಿಗೆ ಮಿತವಾದ ಮತ್ತು ಅತಿಕೋಪ ಮತ್ತು ಕ್ರೂರವಾಗದ ಮಾತನ್ನು (ಮೃದುವಾಗಿ) ಆಡಬೇಕು ಮತ್ತು ಕೇಕೆ ಹಾಕಿ ನಗಬಾರದು.

**ತತ್ ಪ್ರಿಯಾಪ್ರಿಯೇಷು ಸ್ವಪ್ರಿಯಾಪ್ರಿಯೇಷ್ವಿವ ವೃತ್ತಿಃ ॥ ೩೮ ॥**

ಅವಳು ಅವರಿಗೆ ಬೇಕಾದವರು ಬೇಡದವರ ವಿಷಯದಲ್ಲಿ ತನಗೆ ಬೇಕಾದವರು ಬೇಡದವರಂತೆಯೆ ನಡೆಯತಕ್ಕದ್ದು.

**ಭೋಗೇಷು ಅನುತ್ಸೇಕಃ ॥ ೩೯ ॥**

ಭೋಗಸಾಮಗ್ರಿ ಬಹಳವಿದ್ದರೂ ಅವಳು ಗರ್ವಪಡಬಾರದು.

**ಪರಿಜನೆ ದಾಕ್ಷಿಣ್ಯಮ್ ॥ ೪೦ ॥**

ಅವಳು ಪರಿವಾರ ಜನಗಳೊಂದಿಗೆ ಸರಳತೆಯಿಂದಲೂ ಉದಾರ ಭಾವದಿಂದಲೂ ನಡೆಯತಕ್ಕದ್ದು.

**ಸ್ವಕರ್ಮಸು ಭೃತ್ಯಜನ ನಿಯಮನಮ್ ಉತ್ಸವೇಷು ಚಾಸ್ಯ ಪೂಜನಮ್ ॥ ೨೪ ॥**

ಅವಳು ಆಳುಗಳನ್ನು ತಮ್ಮ ತಮ್ಮ ಕೆಲಸಗಳಲ್ಲಿ ನಿಯಮಿಸ ಬೇಕು ಮತ್ತು ಉತ್ಸವ ಕಾಲಗಳಲ್ಲಿ ಅವರುಗಳಿಗೆ (ಭೋಜನಾದಿ ಗಳನ್ನು ಇತ್ತು) ಸನ್ಮಾನವನ್ನು ಮಾಡಬೇಕು.

**ಪ್ರವಾಸೆ ಮಂಗಳ ಮಾತ್ರಾಭರಣಾ**
**ದೇವತೋಪವಾಸನಪರಾ**
**ವಾರ್ತಾಯಾಂ ಸ್ಥಿತಾ ಗೃಹಾನ್ ಅವಕ್ಷೇತ ॥ ೪೩ ॥**

ಗಂಡನು ಪ್ರವಾಸದಲ್ಲಿ ಇದ್ದರೆ (ದೇಶಾಂತರ ಹೋಗಿದ್ದರೆ) ಅವಳು ಮಂಗಳ ಸೂಚಿಕವಾದ ಆಭರಣಗಳನ್ನು ಮಟ್ಟಿಗೆ ತೊಡಬೇಕು, ದೇವತಾ ಪ್ರೀತಿಗಾಗಿ ಉಪವಾಸವನ್ನು ಮಾಡಬಹುದು, ಆತನ ವಾರ್ತೆಯನ್ನು ವಿಚಾರಿಸುವುದು ಮತ್ತು ಇದೇ ಭಾವದಲ್ಲಿ ಮನೆಗೆಲಸಗಳನ್ನೂ ಮಾಡತಕ್ಕದ್ದು.

**ಶಯ್ಯಾಚ ಗುರುಜನಮೂಲೆ ॥ ೪೪ ॥**

ಆ ಕಾಲದಲ್ಲಿ ಅವಳು ಹಿರಿಯರೊಡನೆ ಹಾಸಿಗೆಯನ್ನು ಹಾಕಬೇಕು.

**ತದಭಿಮತಾ ಕಾರ್ಯನಿಷ್ಪತ್ತಿಃ ॥ ೪೫ ॥**

ಅವಳು ಆಗ ಅವರ ಮತಾನುಸಾರವಾಗಿ ಕೆಲಸಗಳನ್ನು ನಿಭಾಯಿಸತಕ್ಕದ್ದು.

**ನಾಯಕಾಭಿಮತಾನಾಂ ಚಾರ್ಥಾನಾಮಾರ್ಜನೆ**
**ಪ್ರತಿಸಂಸ್ಕಾರೇಚಯತ್ನಃ ॥ ೪೬ ॥**

ಅವಳು ಗಂಡನಿಗೆ ಇಷ್ಟವಾದ ಪದಾರ್ಥಗಳನ್ನು ಸಂಗ್ರಹಿಸುವುದು ಮತ್ತು ಅವುಗಳನ್ನು ಚೊಕ್ಕಟವಾಗಿಟ್ಟಿರುವುದು.

**ನಿತ್ಯನೈಮಿತ್ತಿಕೇಷು ಉಚಿತೋ ವ್ಯಯಃ ॥ ೪೭ ॥**

ಅವಳು ದಿನಚರಿ ಮತ್ತು ಕಾರಣಾಂತರಗಳಿಂದ ಒದಗುವ ಕೆಲಸಗಳಲ್ಲಿ ಉಚಿತವಾದ ಖರ್ಚನ್ನು ಮಾಡಬೇಕು.

**ಜ್ಞಾತಿಕುಲಸ್ಯಾನಭಿಗಮನಮನ್ಯತ್ರ**
**ವ್ಯಸನೋತ್ಸವಾಭ್ಯಾಮ್ ॥ ೪೮ ॥**

ಅವಳು (ಗಂಡನು ದೇಶಾಂತರದಲ್ಲಿರುವಾಗ) ವಿಪತ್ತು ಮತ್ತು ಉತ್ಸವಕಾಲಗಳಲ್ಲಿ ಹೊರತು ತೌರುಮನೆಗೆ ಹೋಗಬಾರದು.

**ಪರಿಚಾರಿಕೈಃ ಶುಚಿಭಿರಾಜ್ಞಾ**
**ಧಿಷ್ಟಿತೈರನುಮತೇನ ಕ್ರಯವಿಕ್ರಯ**
**ಕರ್ಮಣಾ ಸಾರಸ್ಯಾಪೂರಣಂ ತನೂಕರಣಂ**
**ಚ ಶಕ್ಯಾ ವ್ಯಯಾನಾಮ್ ॥ ೫೨ ॥**

ಆವಳು ಮೋಸಗಾರರಲ್ಲದ ನಂಬಿಕೆಯ ನೌಕರರ ಮೂಲಕ ಒಪ್ಪಿಗೆಯಾದ ರೀತಿ ಕೊಳ್ಳುವುದು, ಮಾರುವುದು ಹೀಗೆ ಮೂಲಧನದ ವೃದ್ಧಿಯನ್ನು ಮಾಡಬೇಕು ಮತ್ತು ಯಥಾಶಕ್ತಿ ಖರ್ಚು ಕಡಮೆ ಮಾಡತಕ್ಕದ್ದು.



# ಶುದ್ಧಾಶುದ್ಧಗಳು

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| | | **ಮುನ್ನುಡಿ** | |
| 4 | ೨ | ಮತೀಸತಿ | ಮತೀಸತೀ |
| | | **ವಿವಾಹ ಮಂಗಳ** | |
| ೪ | ೨೩ | ಮಂಗಳವನ್ನು ತರು | ಮಂಗಳವನ್ನು ತರುವುಳಾಗು |
| ೫ | ೧೧ | ಗೃಹ್ಣಾಮಿ | ಗೃಭ್ಣಾಮಿ |
| ೬ | ೧೦ | ಓಂ ಈಷೆ | ಓಂ ಇಷೆ |
| ೯ | ೧ | ಧಾನ್ಯಾಭಿವೃದ್ಧಿಗಾಗಿ (ಸೇಗಿಲಕೋಲು) | ಅನ್ನಕ್ಕಾಗಿ |
| | | **ಉಪದೇಶ** | |
| ೧೩ | ೪ | ಯತ್ರ ನಾರ್ಯಾಸ್ತು | ಯತ್ರ ನಾರ್ಯಸ್ತು |
| | | **ಗೃಹಿಣೀ ಧರ್ಮ** | |
| ೧೭ | ೨ | ವಾತ್ಸಾಯನ | ವಾತ್ಸ್ಯಾಯನ |
| ೩೪ | ೧ | ಶ್ವಶೃ | ಶ್ವಶ್ರು |

1788—30. ಬೆಂಗಳೂರು ಪ್ರೆಸ್, ಮೈಸೂರು ರೋಡ್, ಬೆಂಗಳೂರು ಸಿಟಿ.